


# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦ | ಬೆಂಗಳೂರು, ಗುರುವಾರ, ನವೆಂಬರ್ ೫, ೨೦೧೫ (ಕಾರ್ತಿಕ ೧೪, ಶಕ ವರ್ಷ ೧೯೩೭) | ಸಂಚಿಕೆ ೪೪ |
| --- | --- | --- |
| Volume 150 | Bengaluru, Thursday, November 5, 2015 (Karthika 14, Shaka Varsha 1937) | Issue 44 |


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### ಸಹಕಾರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಇ 305 ಎಂಆರ್‌ಇ 2015, ಬೆಂಗಳೂರು, ದಿನಾಂಕ: 21.09.2015.**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11 (1) (ix)** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 396 ಎಂಆರ್‌ಇ 2013, ದಿನಾಂಕ: 04.03.2014 ರಲ್ಲಿ ರಾಣೆಬೆನ್ನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನಗೊಂಡ ಶ್ರೀ ಬಸಪ್ಪ ಹನಗೋಡಿ, ಸಾ: ಕೋಣನಲೆ, ರಾಣೆಬೆನ್ನೂರು ತಾಲ್ಲೂಕು ಇವರ ರಾಜೀನಾಮೆಯಿಂದ ತೆರವಾದ ಹುದ್ದೆಗೆ ಶ್ರೀ ಶಿದ್ಲಿಂಗಪ್ಪ ನಿಂಗಪ್ಪ ಕುಡಗೋಲ, ಸಾ: ಹಲಗೇರಿ, ರಾಣೆಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ ಇವರನ್ನು **ರಾಣೆಬೆನ್ನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಸಿ. ಬಸವರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R.553**
**SC - 30**

### ಒಳಾಡಳಿತ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಒಇ 301 ಪಿಎಂಎಸ್ 2015, ಬೆಂಗಳೂರು, ದಿನಾಂಕ: 24–09–2015.**

1872ರ ಭಾರತೀಯ ಕ್ರಿಶ್ಚಿಯನ್ ವಿವಾಹ ಕಾಯಿದೆಯ ಕಲಂ 09 ರನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಭಾರತೀಯ ಕ್ರಿಶ್ಚಿಯನ್ ವಿವಾಹ (ಕರ್ನಾಟಕ) ನಿಯಮಗಳು, 1961 ರಂತೆ **ಪಾಸ್ಟರ್ ರವಿಕುಮಾರ್ ಎಸ್.ಡಿ. ಬಿನ್ ಶಂಕರಪ್ಪ, ದರಗದಕಟ್ಟೆ ಪರುಶುರಾಂಪುರ ಅಂಚೆ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ** ಇವರನ್ನು **ಚಿತ್ರದುರ್ಗ ಜಿಲ್ಲೆಗೆ** ಸೀಮಿತಗೊಳಿಸಿ ಮೇಲಿನ ಕಾಯಿದೆಯಡಿಯ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕ್ರಿಶ್ಚಿಯನ್ ಜನಾಂಗದ ವಿವಾಹ ವಿಧಿಯನ್ನು ನೆರವೇರಿಸಲು ಅನುಮತಿಯನ್ನು ನೀಡಿದೆ.

ಸದರಿ ಕಾಯ್ದೆಯಡಿ ಪ್ರದತ್ತವಾಗಿರುವಂತೆ ಅರ್ಜಿದಾರನು ತಾವು ನೆರವೇರಿಸುವ ಪ್ರತಿ ವಿವಾಹದ ವಿವರಗಳನ್ನು ಕಡ್ಡಾಯವಾಗಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಕರ್ನಾಟಕ, ಬೆಂಗಳೂರು (**Inspector General of Registration and Commissioner for Stamps in Karnataka, Bengaluru**) ಇವರಿಗೆ ಕಳುಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ರಹದಾರಿ ಮತ್ತು ವಿದೇಶಿಯರು)

**PR-554**
**SC-25**

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಇ 261 ಎಂಆರ್ಇ 2015, ಬೆಂಗಳೂರು, ದಿನಾಂಕ: 23-09-2015.

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix)** ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಕೆ.ಆರ್. ನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ.

| ಕ್ರ ಸಂ. | ಹೆಸರು ಮತ್ತು ವಿಳಾಸ |
|---|---|
| 1. | ಶ್ರೀ ನಂದೀಶ್ ಬಿನ್ ದೊಡ್ಡಯ್ಯ, ಚಿಕ್ಕವಡ್ಡರಗುಡಿ, ಕೃಷ್ಣರಾಜನಗರ ತಾಲ್ಲೂಕು, ಮೈಸೂರು ಜಿಲ್ಲೆ. |
| 2. | ಶ್ರೀ ಅಶೋಕ್ ಬಿನ್ ಕೆಂಪೇಗೌಡ, ಅಂಕನಹಳ್ಳಿ, ಕೃಷ್ಣರಾಜನಗರ ತಾಲ್ಲೂಕು, ಮೈಸೂರು ಜಿಲ್ಲೆ. |
| 3. | ಶ್ರೀ ರವಿಕುಮಾರ್ ಎಲ್.ಪಿ. ಬಿನ್ ಲೇಟ್ ಪುಟ್ಟಣ್ಣಯ್ಯ, ಲಾಲನಹಳ್ಳಿ ಗ್ರಾಮ, ಕೃಷ್ಣರಾಜನಗರ ತಾಲ್ಲೂಕು, ಮೈಸೂರು ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಸಿ. ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ-1
ಸಹಕಾರ ಇಲಾಖೆ.

**PR-556**
**SC-30**

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಇ 392 ಎಂಆರ್ಇ 2015 ಬೆಂಗಳೂರು, ದಿನಾಂಕ: 23-09-2015.

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix)** ರಲ್ಲಿ ಪರಂತುದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂ:ಸಇ 248 ಎಂಆರ್ಇ 2013 (ಪಿ), ದಿನಾಂಕ: 03-12-2013ರಲ್ಲಿ ಶ್ರೀ ಕೆ.ಬಿ. ಮುನಿರಾಜು ಬಿನ್ ಲೇಟ್ ದೊಡ್ಡಭೈರಪ್ಪ, ಕೆಂಚನಪುರ ಗ್ರಾಮ, ಸೂಲಿಕೆರೆ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರನ್ನು ಬೆಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರಾಗಿ ನಾಮನಿರ್ದೇಶನ ಮಾಡಿರುವುದನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ ಹಾಗೂ ಅವರ ಬದಲಾಗಿ ಸರ್ಕಾರವು ಶ್ರೀ ಕೂರಲಪ್ಪ ತಂದೆ ಲಕ್ಷ್ಮಯ್ಯ, ತಿಗಳರಪಾಳ್ಯ, ಪೀಣ್ಯ 2ನೇ ಹಂತ (ಪೋಸ್ಟ್), ಬೆಂಗಳೂರು ಇವರನ್ನು **ಬೆಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಸಿ. ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ-1
ಸಹಕಾರ ಇಲಾಖೆ.

**PR-557**
**SC-30**

## PERSONNEL AND ADMINISTRATIVE REFORMS SECRETARIAT

### NOTIFICATION

### NO.DPAR 1 SAT 2014, BENGALURU, DATED: 17-10-2015.

Whereas, the draft of the Karnataka Administrative Tribunal (Recruitment) Rules, 1993, was published as required by Clause (a) of sub-Section (2) of Section 3 of the Karnataka State Civil Services Act, 1978 (Karnataka Act 14 of 1990) in Notification No. DPAR 1 SAT 2014, dated 05th June, 2015 in Part IV-A of the Karnataka Gazette (Extraordinary) dated 05th June, 2015, inviting objections and suggestions from all persons likely to be affected within fifteen days from the date of its publication in the official Gazette.

And whereas the said Gazette was made available to public on 05-06-2015.

And whereas, the objections and suggestions received in this behalf have been considered by the State Government.

Now, therefore, in exercise of the powers confered by sub-Section (1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, further to amend the Karnataka Administrative Tribunal(Recruitment) Rules, 1993 to namely:-

### RULES

1. **Title and commencement,-** (1) These rules may be called the Karnataka Administrative Tribunal (Recruitment) (Amendment) Rules, 2015.

(2) They shall come into force from the date of their publication in the Official Gazette.

2. **Amendment of the schedule,-** In the Karnataka Administrative Tribunal (Recruitment) Rules, 1993, in the schedule,-

(i) For the entries relating to the category of post of `Junior Assistant', the following shall be substituted, namely:-

| | | |
|---|---|---|
| Junior Assistant (₹s. 11600-21000) | Sixty-seven percent by direct recruitment in accordance with the Karnataka Civil Services (Recruitment to Ministerial Posts) Rules, 1978; and Notwithstanding anything contained in the Karnataka Civil Services (Recruitment to Ministerial Posts) Rules, 1978, thirty-three percent by transfer of persons in the cadre of drivers and by promotion from Group-D cadres in the ratio of 1 : 8 Every. 1st vacancy shall be filled by transfer of Drivers.<br>The combined seniority of Group-D cadre shall be determined by treating a person holding a post carying higher scale of pay as senior to a person holding a post carrying lower scale of pay. Seniority inter-se among persons in a cadre carrying same scale of pay being determined on the basis of length of service in the respective cadres.Seniority inter-se among persons in a cadre being maintained. | **For Direct Recruitment / Transfer / Promotion:-**<br>As prescribed in the Karnataka Civil Services (Recruitment to Ministerial Posts) Rules, 1978. |

(ii) In the entries relating to the category of post of 'Typist ', for entries in Column (2), the following shall be substituted, namely:-

"Fifty percent by Direct Recruitment and fifty percent by promotion from Group - D cadres on the basis of combined seniority. Seniority being determined by treating a person holding a post carrying higher scale of pay as senior to a person holding a post carrying lower scale of pay. Seniority inter-se among persons in a cadre carrying same scale of pay being determined on the length of service in the respective cadres. Seniorty inter-se among persons in a cadre being maintained."

By Orders and in the name of Governor of Karnataka

**UMA. K**

Under Secretary to Government,
Department of Personnel and Administrative
Reforms. (Service Rules-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಆಸುಇ 1 ಸೇಆನ್ಯಾ 2014, ಬೆಂಗಳೂರು, ದಿನಾಂಕ: 17-10-2015.

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪ-ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಅಧಿಸೂಚನೆ ಸಂಖ್ಯೆ:ಸಿಆಸುಇ 1 ಸೇಆನ್ಯಾ 2014, ದಿನಾಂಕ 5ನೇ ಜೂನ್, 2015ರಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ (ನೇಮಕಾತಿ) (ತಿದ್ದುಪಡಿ) ನಿಯಮಗಳು, 2015ರ ಕರಡನ್ನು ಕರ್ನಾಟಕ ರಾಜ್ಯಪತ್ರ ವಿಶೇಷ ಪತ್ರಿಕೆಯ ಭಾಗ IV-A ರಲ್ಲಿ (ವಿಶೇಷ ಸಂಚಿಕೆ ದಿನಾಂಕ ಜೂನ್ 5, 2015) ಪ್ರಕಟಿಸಿ, ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಬಾಧಿತರಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿರುವುದರಿಂದ ;

ಮತ್ತು ಸದರಿ ರಾಜ್ಯ ಪತ್ರವನ್ನು 2015ರ ಜೂನ್, 5 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ ;

ಸದರಿ ಕರಡು ನಿಯಮಗಳಿಗೆ ಸಂಬಂಧಪಟ್ಟಂತೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿದೆ.

ಈಗ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಕೆಳಗಿನಂತೆ ನಿಯಮಗಳನ್ನು ರಚಿಸುತ್ತದೆ, ಎಂದರೆ:-

#### ನಿಯಮಗಳು

1. **ಹೆಸರು ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ (ನೇಮಕಾತಿ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

   (2) ಈ ನಿಯಮಗಳು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



2. **ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಆಡಳಿತ ನ್ಯಾಯ ಮಂಡಳಿ (ನೇಮಕಾತಿ) ನಿಯಮಗಳು, 1993ರ ಅನುಸೂಚಿಯಲ್ಲಿ,-

(i) 'ಕಿರಿಯ ಸಹಾಯಕರ' ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ಅಂಕಣಗಳಲ್ಲಿನ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

| | | |
|---|---|---|
| ಕಿರಿಯ ಸಹಾಯಕರು (₹.11600–21000) | ಕರ್ನಾಟಕ ನಾಗರೀಕ ಸೇವೆಗಳು(ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು, 1978ರ ಅನುಸಾರವಾಗಿ ನೇರ ನೇಮಕಾತಿಯ ಮೂಲಕ ಶೇಕಡ 67 ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು, 1978ರಲ್ಲಿ ಏನೇ ಒಳಗೊಂಡಿದ್ದರೂ ಚಾಲಕರ ವೃಂದದಲ್ಲಿನ ವ್ಯಕ್ತಿಗಳ ವರ್ಗಾವಣೆಯ ಮೂಲಕ ಶೇಕಡ 33 ಮತ್ತು 1:8ರ ಅನುಪಾತದಲ್ಲಿ ಗ್ರೂಪ್–ಡಿ ವೃಂದದಿಂದ ಬಡ್ತಿಯ ಮೂಲಕ ಪ್ರತಿ ಮೊದಲ ರಿಕ್ತ ಸ್ಥಾನವನ್ನು ಚಾಲಕರ ವರ್ಗಾವಣೆಯ ಮೂಲಕ ತುಂಬತಕ್ಕದ್ದು.<br>ಗ್ರೂಪ್ –ಡಿ ವೃಂದದ ಸಂಯೋಜಿತ ಜೇಷ್ಠತೆಯನ್ನು ಉನ್ನತ ವೇತನದ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಯನ್ನು ವೇತನದ ಕಿರಿಯ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಗಿಂತ ಹಿರಿಯವನೆಂದು ಭಾವಿಸುವ ಮೂಲಕ ನಿರ್ಧರಿಸತಕ್ಕದ್ದು.<br>ಸಮಾನ ವೇತನವನ್ನು ಹೊಂದಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು. ವೃಂದದಲ್ಲಿನ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ನಿರ್ವಹಿಸಿರತಕ್ಕದ್ದು. | **ನೇರ ನೇಮಕಾತಿ/ವರ್ಗಾವಣೆ/ ಬಡ್ತಿಗೆ:–**<br>ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳಿಗೆ ನೇಮಕಾತಿ) ನಿಯಮಗಳು 1978ರಲ್ಲಿ ನಿಯಮಿಸಲಾದಂತೆ. |

(ii) 'ಬೆರಳಚ್ಚುಗಾರ' ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (2)ನೇ ಕಾಲಂ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ನೇರ ನೇಮಕಾತಿಯ ಮೂಲಕ ಶೇಕಡ ಐವತ್ತು ಮತ್ತು ಸಂಯೋಜಿತ ಜೇಷ್ಠತೆಯ ಆಧಾರದ ಮೇಲೆ ಗ್ರೂಪ್ ಡಿ ವೃಂದದಿಂದ ಬಡ್ತಿಯ ಮೂಲಕ ಶೇಕಡ ಐವತ್ತು ಜೇಷ್ಠತೆಯನ್ನು ಉನ್ನತ ವೇತನದ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಯನ್ನು ವೇತನದ ಕಿರಿಯ ಶ್ರೇಣಿಯನ್ನು ಹೊಂದಿರುವ ಹುದ್ದೆಯ ವ್ಯಕ್ತಿಗಿಂತ ಹಿರಿಯವನೆಂದು ಭಾವಿಸುವ ಮೂಲಕ ನಿರ್ಧರಿಸತಕ್ಕದ್ದು. ಸಮಾನ ವೇತನವನ್ನು ಹೊಂದಿರುವ ವ್ಯಕ್ತಿಗಳ ಪೈಕಿ ಪರಸ್ಪರ ಜೇಷ್ಠತೆಯನ್ನು ಸಂಬಂಧಪಟ್ಟ ವೃಂದಗಳಲ್ಲಿ ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು. ವೃಂದದಲ್ಲಿನ ವ್ಯಕ್ತಿಗಳ ಪೈಕಿ ಪರಸ್ಪರ ಜ್ಯೇಷ್ಠತೆಯನ್ನು ನಿರ್ವಹಿಸತಕ್ಕದ್ದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾ.ಕೆ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವಾ ನಿಯಮಗಳು–2)

PR-563
SC-700

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.